# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 467 (414) |
| 2) | ಸದಸ್ಯರ ಹೆಸರು | : | ಶ್ರೀ ಎನ್. ರವಿಕುಮಾರ್<br>(ವಿಧಾನಸಭೆಯಿಂದ ಚುನಾಯಿತರಾದವರು) |
| 3) | ಉತ್ತರಿಸುವ ದಿನಾಂಕ | : | 09.03.2020. |
| 4) | ಉತ್ತರಿಸುವವರು | : | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು. |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವನ್ಯಜೀವಿ ಸಂಘರ್ಷದ ಸಂತ್ರಸ್ಥರ ಮನವಿಗಳನ್ನು ಸ್ವೀಕರಿಸಿ ಸರ್ಕಾರಕ್ಕೆ ಸಲ್ಲಿಸಲು ಸರ್ಕಾರದ ವತಿಯಿಂದ ಯಾವ ಯಾವ ಸೇವಾ ಸಂಸ್ಥೆಗಳನ್ನು ಗುರುತಿಸಲಾಗಿದೆ; ಅವುಗಳ ಕೆಲಸಗಳೇನು; ಸಂತ್ರಸ್ಥರ ಮನವಿಗಳನ್ನು ಸಲ್ಲಿಸಲು ಬ್ರೋಕರ್ ಗಳ ಅವಶ್ಯಕತೆ ಇದೆಯೇ; | ವನ್ಯಪ್ರಾಣಿಗಳ ಸಂಘರ್ಷದ ಸಂತ್ರಸ್ಥರ ಮನವಿಗಳನ್ನು ಸ್ವೀಕರಿಸಿ, ಸರ್ಕಾರಕ್ಕೆ ಸಲ್ಲಿಸಲು ಯಾವುದೇ ಸೇವಾ ಸಂಸ್ಥೆಗಳಿಗೆ ಅನುಮತಿ ನೀಡಿರುವುದಿಲ್ಲ ಹಾಗೂ ಸಂತ್ರಸ್ಥರ ಮನವಿಗಳನ್ನು ಸ್ವೀಕರಿಸಲು ಬ್ರೋಕರ್ ಗಳ ಅವಶ್ಯಕತೆ ಇರುವುದಿಲ್ಲ. |
| ಆ) | ಸ್ವಯಂಸೇವಾ ಸಂಸ್ಥೆಗಳು ಸಂರಕ್ಷಿತ ಅರಣ್ಯದಲ್ಲಿ ಕಾರ್ಯ ಚಟುವಟಿಕೆಗಳನ್ನು ನಡೆಸಲು ಸರ್ಕಾರ ಅನುಮತಿ ನೀಡಿದೆಯೇ; ಇಲ್ಲವಾದಲ್ಲಿ, ಅಕ್ರಮವಾಗಿ ಅರಣ್ಯದಲ್ಲಿ ತನ್ನ ಕಾರ್ಯ ಚಟುವಟಿಕೆಗಳನ್ನು ನಡೆಸುತ್ತಿರುವ ಸಂಸ್ಥೆಗಳ ಮೇಲೆ ಯಾವ ಕ್ರಮ ಕೈಗೊಂಡಿದೆ; | ಇಲ್ಲ.<br><br>ವನ್ಯಜೀವಿ (ರಕ್ಷಣಾ) ಕಾಯ್ದೆ, 1972 ರನ್ವಯ ರಕ್ಷಿತ ಅರಣ್ಯ ಪ್ರದೇಶಗಳಲ್ಲಿ ಇಲಾಖೆಯ ಅನುಮತಿ ಇಲ್ಲದೇ ಯಾವುದೇ ವ್ಯಕ್ತಿ / ಸಂಸ್ಥೆಯವರು ಪ್ರವೇಶಿಸಿ, ಅಕ್ರಮ ಚಟುವಟಿಕೆಗಳಲ್ಲಿ ತೊಡಗಿದಲ್ಲಿ, ಅಂತಹವರ ವಿರುದ್ಧ ಅರಣ್ಯ ಮೊಕದ್ದಮೆ ದಾಖಲಿಸಿ, ಕ್ರಮ ಕೈಗೊಳ್ಳಲಾಗುವುದು. |
| ಇ) | ನಾಗರಹೊಳೆ ಮತ್ತು ಬಂಡೀಪುರ ಹುಲಿ ಸಂರಕ್ಷಿತ ಅರಣ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಸ್ವಯಂಸೇವಾ ಸಂಸ್ಥೆಗಳು ಸೇವೆಯ ಹೆಸರಿನಲ್ಲಿ ಅರಣ್ಯ ಸಂಪತ್ತನ್ನು ಲೂಟಿ ಮಾಡುವುದಿಲ್ಲ ಅಥವಾ ವನ್ಯಜೀವಿಗಳ ಬೇಟೆ ಮಾಡುತ್ತಿಲ್ಲ ಎಂಬುದಾಗಿ ಸರ್ಕಾರ ರಾಜ್ಯದ ಜನತೆಗೆ ಖಾತರಿ ನೀಡುತ್ತದೆಯೇ; ಇಲ್ಲವಾದಲ್ಲಿ, ಅಂತಹ ಸ್ವಯಂಸೇವಾ ಸಂಸ್ಥೆಗಳನ್ನು ಮೀಸಲು ಅರಣ್ಯದಲ್ಲಿ ಅನಧಿಕೃತವಾಗಿ ಪ್ರವೇಶ ಮಾಡದಂತೆ ತಡೆಯಲು ಸರ್ಕಾರ ಯಾವ ಕ್ರಮಕೈಗೊಂಡಿದೆ? | ನಾಗರಹೊಳೆ ಮತ್ತು ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶಗಳಲ್ಲಿ ಯಾವುದೇ ಸ್ವಯಂಸೇವಾ ಸಂಸ್ಥೆಗಳಿಗೆ ಅನುಮತಿ ನೀಡಿರುವುದಿಲ್ಲ.<br><br>ವನ್ಯಜೀವಿ (ರಕ್ಷಣಾ) ಕಾಯ್ದೆ, 1972 ರನ್ವಯ ರಕ್ಷಿತ ಅರಣ್ಯ ಪ್ರದೇಶಗಳಲ್ಲಿ ಇಲಾಖೆಯ ಅನುಮತಿ ಇಲ್ಲದೇ ಯಾವುದೇ ವ್ಯಕ್ತಿ / ಸಂಸ್ಥೆಯವರು ಪ್ರವೇಶಿಸಿ, ಅಕ್ರಮ ಚಟುವಟಿಕೆಗಳಲ್ಲಿ ತೊಡಗಿದಲ್ಲಿ, ಅಂತಹವರ ವಿರುದ್ಧ ಅರಣ್ಯ ಮೊಕದ್ದಮೆ ದಾಖಲಿಸಿ, ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ಅಪಜೀ 34 ಎಫ್ ಡಬ್ಲ್ಯೂ ಎಲ್ 2020

(ಆನಂದ್ ಸಿಂಗ್)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು